॥ ಪ್ರತಿಪದಾರ್ಥ ॥

**ದೇವ**—ದಾನಾದಿಗುಣಗಳಿಂದ ಕೂಡಿದ । **ಅಗ್ನೇ**—ಎಲೈ ಅಗ್ನಿಯೇ । **ಸಃ**—ಸಕಲಗುಣಪೂರಿತನಾದ । **ತ್ವಂ**—ಆ ನೀನು । **ಸೌಭಗತ್ವಸ್ಯ**— ಸೌಭಾಗ್ಯದ ಸ್ವರೂಪವನ್ನು । **ವಿದ್ವಾನ್**— ತಿಳಿದುಕೊಂಡು । **ಇಹ**—ಈ ಯಜ್ಞಕರ್ಮದಲ್ಲಿ । **ಅಸ್ಮಾಕಂ ಆಯುಃ**—ನಮ್ಮ ಆಯುಸ್ಸನ್ನು । **ಪ್ರ ತಿರ**— ಬೆಳೆಸು । **ನಃ**—(ಅಂತಹ) ನಮ್ಮ । **ತತ್**—ಆ ಆಯುಸ್ಸನ್ನು । **ಮಿತ್ರಃ**—(ರಕ್ಷಕನಾದ) ಮಿತ್ರನೂ । **ವರುಣಃ**—(ಅನಿಷ್ಟಗಳನ್ನು ನಾಶಮಾಡುವ) । ವರುಣನೂ । **ಅದಿತಿಃ**— ಅಖಂಡಳಾದ ದೇವಮಾತೆಯೂ । **ಸಿಂಧುಃ**— ಪ್ರವಹಿಸುವ ನದೀ ದೇವತೆಯೂ । **ಪೃಥಿವೀ**—ವಿಸ್ತಾರವಾದ ಭೂಮಾತೆಯೂ । **ಉತ**—ಮತ್ತು । **ದ್ಯೌಃ**— ಪ್ರಕಾಶಮಾನವಾದ ದ್ಯುಲೋಕಾಧಿದೇವತೆಯೂ । **ಮಮಹಂತಾಂ**—ರಕ್ಷಿಸಲಿ ॥

॥ ಭಾವಾರ್ಥ ॥

ದಾನಾದಿಗುಣಗಳಿಂದ ಕೂಡಿದ ಎಲೈ ಅಗ್ನಿಯೇ, ಸಕಲಗುಣಪೂರಿತನಾದ ನೀನು ಸೌಭಾಗ್ಯದ ಸ್ವರೂಪವನ್ನು ತಿಳಿದುಕೊಂಡು ಈ ಯಜ್ಞಕರ್ಮದಲ್ಲಿ ನಮ್ಮ ಆಯುಸ್ಸನ್ನು ಬೆಳೆಸು. ನಮ್ಮ ಆಯುಸ್ಸನ್ನು ಮಿತ್ರನೂ, ವರುಣನೂ, ಅದಿತಿಯೂ ಸಾಗರಾಧಿದೇವತೆಯೂ, ಭೂಮಾತೆಯೂ ಮತ್ತು ದ್ಯುಲೋಕಾಧಿದೇವತೆಯೂ ಸಹ ವೃದ್ಧಿಪಡಿಸಿ ರಕ್ಷಿಸಲಿ.

English Translation

Divine Agni, do you who know what is good fortune on this occasion, prolong our existence, and may Mitra, Varuna, Aditi, ocean, earth and heaven preserve it to us.

॥ ವಿಶೇಷವಿಷಯಗಳು ॥

**ಸ ತ್ವಮಗ್ನೇ**—ಅಂತಹ ನೀನು ಎಂದು ಹೇಳಿರುವುದರಿಂದ ಹಿಂದೆ ಹೇಳಿದ ಗುಣಗಳಿಂದ ಕೂಡಿದ ನೀನು ಎಂದರ್ಥ. ಎಂದರೆ ಹಿಂದಿನ ಋಕ್ಕುಗಳಲ್ಲಿ

**ದೇವೋ ದೇವಾನಾಮಸಿ ಮಿತ್ರೋ ಅದ್ಭುತೋ ವಸುರ್ವಸೂನಾಮಸಿ ಚಾರುರಧ್ವರೇ ।**
( ಋ. ಸಂ. ೧-೯೪-೧೩ )

**ತತ್ತೇ ಭದ್ರಂ ಯತ್ಸಮಿದ್ಧಃ ಸ್ವೇ ದಮೇ ಸೋಮಾಹುತೋ ಜರಸೇ ಮೃಳಯತ್ತಮಃ ।**
**ದಧಾಸಿ ರತ್ನಂ ದ್ರವಿಣಂ ಚ ದಾಶುಷೇಽಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ ॥**
( ಋ. ಸಂ. ೧-೯೪-೧೪ )

ಎಂಬುದಾಗಿ ದೇವತೆಗಳ ಮತ್ತು ಮಾನವರ ಸಕಲಸೌಭಾಗ್ಯಕ್ಕೂ ಕಾರಣನಾದ ಅಗ್ನಿಯೇ ಎಂದು ಸಂಬೋಧನೆ ಮಾಡಲಾಗಿದೆ.

**ಸೌಭಗತ್ವಸ್ಯ ವಿದ್ವಾನ್—ಸುಭಗಸ್ಯ ಭಾವಃ ಸೌಭಗಂ । ತಸ್ಯ ಭಾವಃ ।** ಎಂದರೆ ಸಕಲಸೌಭಾಗ್ಯ ಸಂಪತ್ತುಗಳನ್ನೂ ತಿಳಿದವನಾಗಿ ; **ಜಾತವೇದಾಃ** ಇತ್ಯಾದಿ ವಿಶೇಷಣಗಳಿಂದ ಅಗ್ನಿಯ ಸರ್ವಜ್ಞತ್ವವನ್ನು ವರ್ಣಿಸಿರುವುದರಿಂದ ಯಜ್ಞಕರ್ತರಶ್ರದ್ಧಾ ಭಕ್ತಿಗಳನ್ನೂ, ಅವರ ಕರ್ತವ್ಯತತ್ಪರತೆಯನ್ನೂ ಆಯಾ ಸತ್ಕರ್ಮಗಳಿಗೆ ತಕ್ಕ ಫಲಗಳನ್ನೂ ಸಂಪೂರ್ಣವಾಗಿ ತಿಳಿದು ಸಕಲ ಸೌಭಾಗ್ಯ ಸಂಪತ್ತುಗಳನ್ನು ಅವರಿಗೆ ಒದಗಿಸುತ್ತಾ.

**ಅಸ್ಮಾಕಮಾಯುಃ ಪ್ರ ತಿರ—** ನಮ್ಮ ಆಯುಸ್ಸನ್ನು ವೃದ್ಧಿಯಾಗುವಂತೆ ಮಾಡು. **ಪ್ರ ತಿರ** ಶಬ್ದಕ್ಕೆ **ಪ್ರವರ್ಧಯ** ಎಂದು ನಿರುಕ್ತಕಾರರು ವಿವರಿಸಿ (ನಿ. ೧೦-೪೦) ಋಕ್ಸಂಹಿತೆಯ —

**ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸು ಪ್ರ ತಿರಾ ನ ಆಯುಃ ।**
(ಋ. ಸಂ. ೧೦-೫೯-೫)

ಎಂಬ ಋಕ್ಕನ್ನು ಉದಹರಿಸಿ ತೋರಿಸುತ್ತಾರೆ. ಇದರಂತೆಯೇ ಅನೇಕಸಂದರ್ಭಗಳಲ್ಲಿ ನಮ್ಮ ಆಯುಸ್ಸನ್ನು ಬೆಳೆಸು, ನಾವು ದೀರ್ಘಕಾಲ ಜೀವಿಸುವಂತಾಗಲಿ ಎಂದರ್ಥವನ್ನು ಕೊಡುತ್ತದೆ. ಅದರಂತೆ ಇಲ್ಲಿಯೂ **ಅಸ್ಮಾಕಮಾಯುಃ ಪ್ರ ತಿರ** ಎಂದರೆ ನಮ್ಮ ಆಯುಸ್ಸು ವೃದ್ಧಿಯಾಗುವಂತೆ ಮಾಡು ಎಂದರ್ಥ.

**ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ।** ಈ ದೇವತೆಗಳೆಲ್ಲರೂ ಸಹ ಅಗ್ನಿಯಿಂದ ಅನುಗೃಹೀತವಾದ ನಮ್ಮ ಸೌಭಾಗ್ಯಸಂಪತ್ತುಗಳನ್ನು ಬೆಳಿಸಲಿ, ಪೂಜ್ಯವಾದುದನ್ನಾಗಿ ಮಾಡಲಿ. ಅವು ನಮ್ಮ ಭಾಗಕ್ಕೆ ಶ್ರೇಯಸ್ಕರಗಳಾಗುವಂತೆ ಮಾಡಲಿ. ಇದು ಈ ಸೂಕ್ತದ ಕೊನೆಯ ಪ್ರಾರ್ಥನೆ. ಸೂಕ್ತದ ಆದಿಯಿಂದ ಇಲ್ಲಿಯ ವರೆಗೆ ಅಗ್ನಿದೇವತಾಕವಾಗಿದ್ದು, ಸೂಕ್ತದ ಕೊನೆಯ ಅರ್ಧದಲ್ಲಿ ಈ ವಿಧವಾಗಿ ಸರ್ವದೇವತಾಕವಾದ ಪ್ರಾರ್ಥನೆಯು ಕುತ್ಸಋಷಿಗಳ ಕೃತಿಯ ವೈಶಿಷ್ಟ್ಯವು. ಈ ವೈಶಿಷ್ಟ್ಯವು ಭಾರದ್ವಾಜ, ಗೃತ್ಸಮದ ಇತ್ಯಾದಿ ಋಷಿಗಳ ಕೃತಿಗಳಲ್ಲೂ ಕಂಡು ಬರುತ್ತದೆ. ಇದಕ್ಕೆ **ಉದರ್ಕ**ವೆಂದು ಪಾರಿಭಾಷಿಕ ವಚನವು ಪ್ರಸಿದ್ಧವಾಗಿದೆ. ಕುತ್ಸಋಷಿಗಳ **ಉದರ್ಕ**ವನ್ನು ಬೃಹದ್ದೇತೆಯು ಈ ರೀತಿ ಪ್ರಶಂಸಿಸಿದೆ.

**ಇಮಂ ಕುತ್ಸ ಆಂಗಿರಸೋ ದದರ್ಶ ಜಾತವೇದಸ್ಯಂ ಜಗಾದ ಷೋಳಶರ್ಚಂ ।**
**ಪೂರ್ವೋ ದೇವಾ ಇತ್ಯೃಚೋ ದೇವದೇವಾಸ್ತ್ರಯಃ ಪಾದಾ ಉತ್ತಮಾಯಾ ಸ್ತುತೋಽರ್ಧಂ ॥**

**ತಸ್ಯೈವ ವಾ ಯಸ್ಯ ತತ್ಪೂರ್ವಸೂಕ್ತಂ ಮಿತ್ರಾದಿಭ್ಯೋ ವಾತ್ರ ಷಡ್ಭಿಃ ಪ್ರಕೃತಾಭ್ಯಃ ।**
**ಅಂತ್ಯೋಽರ್ಧರ್ಚಸ್ತು ವಾ ಷಣ್ಣಾಂ ಸ್ತುತಾನಾಂ ಪೂರ್ವೋ ದೇವಾಃ ಪಾದೈಸ್ತು ತ್ರಿಭಿಃ ಸ್ತುತಾಃ॥**

**ಭರದ್ವಾಜೇ ಗೃತ್ಸಮದೇ ವಸಿಷ್ಠೇ ನೋಧಸ್ಯಗಸ್ತ್ಯೇ ವಿಮದೇ ನಭಾಕೇ ।**
**ಕುತ್ಸೇ ನೋದರ್ಕಾ ಬಹುದೈವತೇಷು ತಥಾ ದ್ವಿದೇವೇಷು ಸಮಾನಧರ್ಮಿಣಃ ॥**
(ಬೃಹದ್ದೇವತಾ III. 126—128)

ಕುತ್ಸ ಆಂಗಿರಸನು ಈ ಸೂಕ್ತದ (೧-೯೪) ದರ್ಶನವನ್ನು ಪಡೆದು ಹದಿನಾರು ಋಕ್ಕುಗಳುಳ್ಳ ಈ ಸೂಕ್ತವನ್ನು ಜಾತವೇದಸ್ಸಿನ ಪರವಾಗಿ ಪಠಿಸಿದನು. **ಪೂರ್ವೋ ದೇವಃ** ಎಂಬ ಎಂಟನೇ ಋಕ್ಕಿನ ಮೊದಲು ಮೂರು ಪಾದಗಳೂ, ಕೊನೆಯ ಋಕ್ಕಿನ ಉತ್ತರಾರ್ಧವೂ ಬಹುದೇವತಾಕವಾಗಿದೆ. ಭರದ್ವಾಜ, ಗೃತ್ಸಮದ. ವಸಿಷ್ಠ, ನೋಧಾಃ, ಅಗಸ್ತ್ಯ, ವಿಮದ, ನಭಾಕ ಇವರ ಸೂಕ್ತಗಳಲ್ಲಿಯೂ **ಉದರ್ಕ**ಗಳಿದ್ದರೂ ಸಹ ಅವು ಬಹುದೇವತಾಕವಾಗಿರಲಿ, ದ್ವಿದೇವತಾಕವಾಗಿರಲಿ ಕುತ್ಸಋಷಿಯ **ಉದರ್ಕ**ದಲ್ಲಿರುವ ಪಲ್ಲವಿಯ ಸಮಾನ ಧರ್ಮವನ್ನು ಹೊಂದಿರುವುದಿಲ್ಲ, ಎಂದು ಕುತ್ಸಋಷಿಯ ಕೃತಿಯಲ್ಲಿ ವೈಶಿಷ್ಟ್ಯವನ್ನು ತೋರಿಸಲಾಗಿದೆ.

ಒಟ್ಟಿನಲ್ಲಿ ಎಂಟು ಋಷಿಗಳ ಕೃತಿಗಳಲ್ಲಿ ಈ ವಿಧವಾದ **ಉದರ್ಕವು** ಸೂಕ್ತಗಳ ಕೊನೆಯಲ್ಲಿ ಪಠಿತವಾಗಿವೆ. ಆದರೆ ಯಾವ ಋಷಿಯ ಸೂಕ್ತದ ಕೊನೆಯ ಅರ್ಧವೂ ಬಹುದೇವತಾಕವಾಗಿಲ್ಲ. ಈ ಅಂಶವನ್ನು ಉದಾಹರಣೆಗಳೊಂದಿಗೆ ಮುಂದಿನ ಸೂಕ್ತದ ವಿವರಣೆಯಲ್ಲಿ ವಿಶದವಾಗಿ ವಿಮರ್ಶಿಸಲಾಗುವುದು

### ವ್ಯಾಕರಣಪ್ರಕ್ರಿಯಾ

**ಸೌಭಗತ್ವಸ್ಯ**—ಸುಭಗಸ್ಯ ಭಾವಃ ಸೌಭಗಮ್. **ಸುಭಗಾನ್ಮಂತ್ರೇ**—ಎಂದು ಉದ್ಗಾತ್ರಾದಿಯಲ್ಲಿ ಪಾಠ ಮಾಡಿರುವುದರಿಂದ ಭಾವಾರ್ಥದಲ್ಲಿ ಞಞ್ ಪ್ರತ್ಯಯ. ಞಿತ್ತಾದುದರಿಂದ ಆದಿವೃದ್ಧಿ ಬರುತ್ತದೆ. ಸೌಭಗವೆಂದರೇ ಭಾವಾರ್ಥ ತೋರುತ್ತಿರುವಾಗ ತಿರುಗಿ ಭಾವಾರ್ಥಕ ತ್ವಪ್ರತ್ಯಯವನ್ನು ಸೌಭಗ ಶಬ್ದದ ಮೇಲೆ ಛಾಂದಸವಾಗಿ ಸ್ವೀಕರಿಸಬೇಕು. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತಿರ**—ಪ್ರ ಪೂರ್ವವಾದ ತಿರ ಧಾತುವು ವೃದ್ಧ್ಯರ್ಥದಲ್ಲಿದೆ. ಲೋಟ್. ಮಧ್ಯಮಪುರುಷ, ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮಮಹಂತಾಮ್**—ಮಹ ಪೂಜಾಯಾಂ ಧಾತು. ಭ್ವಾದಿ. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಝೋಽಂತಃ** ಎಂಬುದರಿಂದ ಅಂತಾದೇಶ **ಆಮೇತಃ** (ಪಾ.ಸೂ.೩-೪-೯೦) ಎಂಬುದರಿಂದ ಲೋಟಿನಲ್ಲಿ ಬಂದ ಏತ್ವಕ್ಕೆ ಆಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ತುಜಾದಿಯಲ್ಲಿ ಸೇರಿರುವುದರೀದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೧೬ ‖

೯೪ ನೇ ಸೂಕ್ತವು ಸಮಾಪ್ತವಾಗಿದೆ.



**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಮಹೀಪಾಲಸಾಮ್ರಾಜ್ಯ-**

**ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ**

**ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ ಷಷ್ಠೋಽಧ್ಯಾಯಃ ಸಮಾಪ್ತಃ**

**ಶ್ರೀಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ

ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ

ಆರನೆಯ ಅಧ್ಯಾಯವು ಸಮಾಪ್ತವಾದುದು.

——:o:——

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।

ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥